# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1373 (1617)
2. ಸದಸ್ಯರ ಹೆಸರು : ಶ್ರೀ ಪಿ.ಆರ್.ರಮೇಶ್ (ನಾಮ ನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ : 18-03-2021
4. ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ನಿರ್ಮಾಣವಾಗುತ್ತಿರುವ ನಮ್ಮ ಮೆಟ್ರೋ ರೈಲು ಸೇವೆಯನ್ನು ಯಾವ ದಿನಾಂಕದಿಂದ ಸಾರ್ವಜನಿಕ ಸಂಚಾರಕ್ಕೆ ಚಾಲನೆ ನೀಡಲು ಸರ್ಕಾರ ಚಿಂತಿಸಿದೆ: (ವಿವರ ನೀಡುವುದು) | ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ನಿರ್ಮಾಣವಾಗುತ್ತಿರುವ ನಮ್ಮ ಮೆಟ್ರೋ ರೈಲು ಕಾಮಗಾರಿಯನ್ನು ಮುಕ್ತಾಯಗೊಳಿಸಿ ಸಾರ್ವಜನಿಕ ಸಂಚಾರಕ್ಕೆ ಚಾಲನೆ ನೀಡಲು ಈ ಕೆಳಗಿನಂತೆ ಯೋಜಿಸಲಾಗಿದೆ:<br>• ಮೈಸೂರು ರಸ್ತೆ ನಿಲ್ದಾಣದಿಂದ ಕೆಂಗೇರಿಯವರೆಗೆ (7.53 ಕಿ.ಮೀ)- ಜೂನ್ 2021.<br>• ಕೆಂಗೇರಿಯಿಂದ ಚಲ್ಲಘಟ್ಟದವರೆಗೆ (2.20 ಕಿ.ಮೀ) - ಮಾರ್ಚ್ 2022. |
| ಆ) | ಈ ರಸ್ತೆಯಲ್ಲಿ ನಮ್ಮ ಮೆಟ್ರೋ ರೈಲು ಸಂಚಾರಕ್ಕೆ ಕಟ್ಟಡಗಳ ನಿರ್ಮಾಣಕ್ಕಾಗಿ ಆರ್.ವಿ. ಎಂಜಿನಿಯರಿಂಗ್ ಕಾಲೇಜ್ ಪಕ್ಕದಲ್ಲಿ ಪಟ್ಟಣಗೆರೆಗೆ ಹೋಗುವ ಮುಖ್ಯ ರಸ್ತೆಯ ತಿರುವನ್ನು (Cross/Space Between Pillars) ಅನಧಿಕೃತವಾಗಿ ಮುಚ್ಚಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸದರಿ ಕಾರ್ಯದಿಂದ ಕೆಂಗೇರಿ/ ದುಬಾಸಿಪಾಳ್ಯದ ಕಡೆಯಿಂದ ಬರುವ, ಪಟ್ಟಣಗೆರೆಗೆ ಹೋಗುವ ಸಾರ್ವಜನಿಕರಿಗೆ ಸಂಚಾರ ನಡೆಸಲು ತೊಂದರೆಯ ನಿವಾರಣೆ ಕುರಿತು ಸರ್ಕಾರದ ಕ್ರಮವೇನು; (ವಿವರ ನೀಡುವುದು) | ಆರ್.ವಿ. ಎಂಜಿನಿಯರಿಂಗ್ ಕಾಲೇಜ್ ಪಕ್ಕದಲ್ಲಿ ಪಟ್ಟಣಗೆರೆಗೆ ಹೋಗುವ ಮುಖ್ಯ ರಸ್ತೆಯ ತಿರುವನ್ನು (Cross/Space Between Pillars no. P561-P562) ಬೆಂಗಳೂರು ಮೆಟ್ರೋ ರೈಲ್ ನಿಗಮದ ವತಿಯಿಂದ ಅನಧಿಕೃತವಾಗಿ ಮುಚ್ಚಿರುವುದಿಲ್ಲ, ಈ ಮುಖ್ಯ ರಸ್ತೆಯ ತಿರುವನ್ನು ಕೆಂಗೇರಿ ಸಂಚಾರಿ ಪೊಲೀಸ್ ಇಲಾಖೆಯವರು ಮುಚ್ಚಿರುತ್ತಾರೆ. ಕೆಂಗೇರಿ ಸಂಚಾರಿ ಪೊಲೀಸರ ಮಾಹಿತಿಯ ಅನುಸಾರ ಇಲ್ಲಿ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಈ ಕ್ರಮವನ್ನು ಕೈಗೊಳ್ಳಲಾಗಿದೆ. ಪಟ್ಟಣಗೆರೆಗೆ ಹೋಗುವ ಸಾರ್ವಜನಿಕರು ಅಂದಾಜು 800 ಮೀಟರ್ ಮುಂದೆ ಹೋಗಿ ಪಿಲ್ಲರ್ ಸಂಖ್ಯೆ. ಪಿ-524 ಪಿ-525 ರ ನಡುವಲ್ಲಿ ರಸ್ತೆಯ ತಿರುವನ್ನು ಪಡೆದು ಪಟ್ಟಣಗೆರೆಯ ಕಡೆಗೆ ಚಲಿಸಬಹುದು. |

| | | |
|---|---|---|
| ಇ) | ನಮ್ಮ ಮೆಟ್ರೋ ರೈಲು ನಿಲ್ದಾಣಗಳಲ್ಲಿ ಬಹಳಷ್ಟು ಸಂಖ್ಯೆಯ ಖಾಸಗಿ ಭದ್ರತಾ ಸಿಬ್ಬಂದಿಗಳು ಉತ್ತರ ಭಾರತದವರಿದ್ದು, ಇವರಿಂದ ಸ್ಥಳೀಯರಿಗೆ ಪ್ರಮುಖವಾಗಿ ಹಿಂದಿ ಭಾಷೆಯನ್ನು ಅರಿಯದವರಿಗೆ ತೊಂದರೆಯಾಗುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು? (ವಿವರ ನೀಡುವುದು) | ಬೆಂಗಳೂರು ಮೆಟ್ರೋ ರೈಲು ನಿಗಮವು ಭದ್ರತಾ ಸೇವೆಗಳನ್ನು ಕರ್ನಾಟಕ ಪಾರದರ್ಶಕ ನಿಯಮಗಳನ್ವಯ ನಿಗದಿತ ಅವಧಿಗೆ ಟೆಂಡರ್ ಪ್ರಕ್ರಿಯೆ ಮೂಲಕ ಹೊರಗುತ್ತಿಗೆ ಏಜೆನ್ಸಿಗಳ ಮೂಲಕ ಪಡೆದುಕೊಳ್ಳುತ್ತಿದೆ. ಈ ಏಜೆನ್ಸಿಗಳಿಗೆ ಕನ್ನಡ ಓದಲು, ಬರೆಯಲು ಮತ್ತು ಮಾತನಾಡಲು ಬಲ್ಲ ನೌಕರರನ್ನೆ ಸಂಸ್ಥೆಯ ಸೇವೆಗಳಿಗೆ ನಿಯೋಜಿಸಬೇಕೆಂಬ ನಿಭಂದನೆಯನ್ನು ಟೆಂಡರ್ ನಿಯಮಗಳಲ್ಲಿ ಸ್ಪಷ್ಟವಾಗಿ ತಿಳಿಸಲಾಗಿರುತ್ತದೆ. ಈ ಏಜೆನ್ಸಿಗಳು ಭದ್ರತೆಗೆ ಬೇಕಾದ ಅವಶ್ಯಕ ಅರ್ಹ ಸಿಬ್ಬಂದಿ ವರ್ಗದವರನ್ನು ಭದ್ರತಾ ಸೇವೆಗಳಿಗಾಗಿ ನಿಯೋಜಿಸುತ್ತಾರೆ. ಹೊರ ರಾಜ್ಯದ ಖಾಸಗಿ ಭದ್ರತಾ ಸಿಬ್ಬಂದಿಯವರಿಂದ ಸ್ಥಳೀಯರಿಗೆ ಪ್ರಮುಖವಾಗಿ ಹಿಂದಿ ಭಾಷೆಯನ್ನು ಅರಿಯದವರಿಗೆ ತೊಂದರೆಯಾಗದೇ ಇರಲು, ಕನ್ನಡ ಬಾಷೆಯ ಬಗ್ಗೆ ಒಂದು ವಾರದ ತರಬೇತಿ ನೀಡಲಾಗಿರುತ್ತದೆ. |

ಕಡತ ಸಂಖ್ಯೆ: ನಅಇ 73 ಪಿ.ಆರ್.ಜೆ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿಗಳು